# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 08

ಮಾನ್ಯ ಸದಸ್ಯರ ಹೆಸರು : ಶ್ರೀ ಎಂ.ಎ.ಗೋಪಾಲಸ್ವಾಮಿ

ಉತ್ತರಿಸಬೇಕಾದ ದಿನಾಂಕ : 07.12.2020

ಉತ್ತರಿಸಬೇಕಾದ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ | ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸಲು ನಿಗದಿಪಡಿಸಿರುವ ಮಾನದಂಡಗಳೇನು? ಸಮುದಾಯ ಆರೋಗ್ಯ ಕೇಂದ್ರಗಳಿಗೆ ಯಾವ ಯಾವ ಸೌಲಭ್ಯಗಳನ್ನು ಒದಗಿಸಲಾಗುವುದು; | 1. ಭಾರತೀಯ ಸಾರ್ವಜನಿಕ ಆರೋಗ್ಯ ಗುಣಮಟ್ಟಗಳ (IPHS Revised-2012) ಪ್ರಕಾರ:-<br><br>ಸಮತಟ್ಟು ಪ್ರದೇಶಗಳಲ್ಲಿ 1,20,000 ಜನಸಂಖ್ಯೆಗೆ ಒಂದರಂತೆ ಒಂದು ಸಮುದಾಯ ಅರೋಗ್ಯ ಕೇಂದ್ರವನ್ನು ಮತ್ತು ಗುಡ್ಡಗಾಡು ಪ್ರದೇಶ, ಮರುಭೂಮಿ ಮತ್ತು ಆದಿವಾಸಿ ಪ್ರದೇಶದಲ್ಲಿ 80000 ಜನಸಂಖ್ಯೆಗೆ /ಪ್ರತಿ ನಾಲ್ಕು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಒಂದನ್ನು ಸಮುದಾಯ ಆರೋಗ್ಯ ಕೇಂದ್ರವನ್ನಾಗಿ ಮೇಲ್ದರ್ಜೆಗೇರಿಸಲಾಗುವುದು.<br>ಸಮುದಾಯ ಆರೋಗ್ಯ ಕೇಂದ್ರಕ್ಕೆ ಒಟ್ಟು 33 ಸಿಬ್ಬಂದಿ ಒದಗಿಸಲಾಗುವುದು.<br><br>ಹೊರರೋಗಿ/ಒಳರೋಗಿ ದಾಖಲಾತಿ, ವಿವಿಧ ರೋಗಗಳ ತಪಾಸಣೆ, ಪ್ರಸೂತಿ ಆರೈಕೆ, ದಂತ ಚಿಕಿತ್ಸೆ, ಸಣ್ಣ ಪ್ರಮಾಣದ ಶಸ್ತ್ರಚಿಕಿತ್ಸೆ ಸೇವೆಗಳು, ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ಅಂಬ್ಯುಲೆನ್ಸ್ ಸೇವೆ ಹಾಗೂ ಇತರೆ ಅವಶ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುವುದು. |
| ಆ | ಹಾಸನ ಜಿಲ್ಲೆಯಲ್ಲಿ ಎಷ್ಟು ಪ್ರಾಥಮಿಕ ಆರೋಗ್ಯ ಕೇಂದ್ರಗಳು ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸಲು ಅರ್ಹತೆ ಪಡೆದುಕೊಂಡಿವೆ; (ತಾಲ್ಲೂಕುವಾರು ಮಾಹಿತಿ ನೀಡುವುದು) | 2011ರ ಜನಗಣತಿಯ ಆಧಾರದ ಮೇಲೆ ಹಾಸನ ಜಿಲ್ಲೆಯ ಒಟ್ಟು ಗ್ರಾಮೀಣ ಜನಸಂಖ್ಯೆ;-1399658 ಇದ್ದು, ಜನಸಂಖ್ಯೆಗನುಗುಣವಾಗಿ ಪ್ರಸ್ತುತ 12 ಸಮುದಾಯ ಆರೋಗ್ಯ ಕೇಂದ್ರ ಸ್ಥಾಪಿಸಲು ಅವಕಾಶವಿದ್ದು, ಹಾಲಿ 15 ಸಮುದಾಯ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. |

| | | |
|---|---|---|
| ಇ | ಆ ಪೈಕಿ ಕಳೆದ 5 ವರ್ಷಗಳಲ್ಲಿ ಎಷ್ಟು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಲಾಗಿದೆ; ( ತಾಲ್ಲೂಕುವಾರು ಮಾಹಿತಿ ನೀಡುವುದು) | ಹಾಸನ ಜಿಲ್ಲೆಯಲ್ಲಿ ಕಳೆದ 5 ವರ್ಷಗಳಲ್ಲಿ ಯಾವುದೇ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಲಾಗಿರುವುದಿಲ್ಲ. |
| ಈ | ಹಾಸನ ಜಿಲ್ಲೆಗೆ ಎಷ್ಟು ಪ್ರಮಾಣದ ಕೋವಿಡ್ ಲಸಿಕೆ ಅವಶ್ಯಕತೆ ಇದೆ; ಹಾಗೂ ಎಷ್ಟು ಪ್ರಮಾಣದ ಕೋವಿಡ್ ಲಸಿಕೆ ಸರಬರಾಜು ಮಾಡಲು ಉದ್ದೇಶಿಸಲಾಗಿದೆ? (ವಿವರ ನೀಡುವುದು) | ಭಾರತ ಸರ್ಕಾರದ ಮಾರ್ಗಸೂಚಿಯಂತೆ ಪ್ರಥಮ ಆದ್ಯತೆಯಾಗಿ ಆರೋಗ್ಯ ಕಾರ್ಯಕರ್ತರನ್ನು ನೋಂದಾಯಿಸಲು ನಿರ್ದೇಶಿಸಲಾಗಿದ್ದು ಅದರಂತೆ ಸರ್ಕಾರಿ ಮತ್ತು ಖಾಸಗಿ ವಲಯಗಳಲ್ಲಿನ ಆರೋಗ್ಯ ಕಾರ್ಯಕರ್ತರ ಮಾಹಿತಿಯನ್ನು ಜಿಲ್ಲಾಮಟ್ಟದಲ್ಲಿಯೇ ಪಡೆಯಲಾಗಿದ್ದು ಅದನ್ನು ಕೋವಿನ್ ಪೋರ್ಟಲ್‌ನಲ್ಲಿ ಇಂದೀಕರಿಸಲು ಸೂಚಿಸಲಾಗಿದೆ. ಈ ಮಾಹಿತಿಯ ಕ್ರೂಢೀಕರಣ ಪ್ರಕ್ರಿಯೆ ಚಾಲ್ತಿಯಲ್ಲಿದೆ. ಭಾರತ ಸರ್ಕಾರದಿಂದಲೇ ಲಸಿಕೆಗಳು ಸರಬರಾಜಾಗಲಿದೆ. |

**ಸಂಖ್ಯೆ: ಆಕುಕ 132 ಎಸ್‌ಬಿವಿ 2020**

**(ಡಾ||ಕೆ.ಸುಧಾಕರ್)**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ

ವೈದ್ಯಕೀಯ ಶಿಕ್ಷಣ ಸಚಿವರು

ಪ್ರಶ್ನೆ ಸಂಖ್ಯೆ:- 08 ಕ್ಕೆ ಅನುಬಂಧ -1

| ಜಿಲ್ಲೆ | ತಾಲ್ಲೂಕು | ಕ್ರ.ಸಂ | ಸಮುದಾಯ ಆರೋಗ್ಯ ಕೇಂದ್ರಗಳು |
|---|---|---|---|
| ಹಾಸನ(15) | ಅರಸೀಕೆರೆ | 1 | ಗಡಸಿ |
| | ಅರಸೀಕೆರೆ | 2 | ಜೆ.ಸಿ.ಪುರ |
| | ಅರಕಲಗೂಡು | 3 | ಕೊಣನೂರು |
| | ಬೇಲೂರು | 4 | ಹಳೆಬೀಡು |
| | ಬೇಲೂರು | 5 | ಹರೇಹಳ್ಳಿ |
| | ಚನ್ನರಾಯಪಟ್ಟಣ | 6 | ಹಿರಿಸಾವೆ |
| | ಚನ್ನರಾಯಪಟ್ಟಣ | 7 | ಶ್ರವಣಬೆಳಗೋಳ |
| | ಚನ್ನರಾಯಪಟ್ಟಣ | 8 | ಉದಯ ಪುರ |
| | ಹೊಳೇನರಸೀಪುರ | 9 | ಹಳ್ಳಿ ಮೈಸೂರು |
| | ಹೊಳೇನರಸೀಪುರ | 10 | ದೊಡ್ಡಕುಂಚಾವೆ |
| | ಹೊಳೇನರಸೀಪುರ | 11 | ಪಡುವಲಹಿಪ್ಪೆ |
| | ಹಾಸನ | 12 | ದುದ್ದ |
| | ಹಾಸನ | 13 | ಶಾಂತಿಗ್ರಾಮ |
| | ಚನ್ನರಾಯಪಟ್ಟಣ | 14 | ನುಗೇಹಳ್ಳಿ |
| | ಹಾಸನ | 15 | ಮೊಸಳೆ ಹೊಸಹಳ್ಳಿ |